# ಒಂದು ಚಿಕ್ಕ ಕೆಚ್ಚೆದೆಯ ಗಿಳಿ

## ಜಾತಕ ಕತೆ

ಲೇಃ ರಾಫೆ ಮಾರ್ಟಿನ
ಚಿತ್ರಃ ಸುಸಾನ ಗೆಬರ



ಕನ್ನಡಕ್ಕೆಃ ಪ್ರಭಾಕರ ನಾನಾವಟಿ

ಒಂದು ದಟ್ಟವಾದ ಅರಣ್ಯದಲ್ಲಿ ಒಂದು ಚಿಕ್ಕ ಗಿಳಿ ಇರುತ್ತಿತ್ತು.

ಒಂದು ದಿನ ಆಕಾಶದಲ್ಲೆಲ್ಲ ಕಾರ್ಮೋಡಗಳೇ ಕಾರ್ಮೋಡುಗಳು. ಮಿಂಚು ಮಿನುಗತೊಡಗಿತು. ಆಕಾಶದಲ್ಲಿಂದ ಸಿಡಿಲು ಕೆಳಬಂದು ಒಂದು ಒಣದಾದ ಮರದ ಮೇಲೆ ಬಿದ್ದಾಗ ಗಿಡಕ್ಕೆ ಬೆಂಕಿ ಹತ್ತಿತು.. ಗಾಳಿಯಿಂದಾಗಿ ಕಾಡಿಗೆನೇ ಬೆಂಕಿ ಹತ್ತಿತು.

“ಆಗ ಗಿಳಿಯು ಬೆಂಕಿ, ಬೆಂಕಿ” ಎಂದು ಕೂಗುತ್ತ ಹೊಗೆಯಿಂದ ಹೊರಬಿದ್ದು ಅರಣ್ಯದಲ್ಲಿಯ ಎಲ್ಲ ಪ್ರಾಣಿ ಮತ್ತು ಪಕ್ಷಿಗಳಿಗೆ ಬೆಂಕಿಯಿಂದ ದೂರ ಹೋಗಲೇಂದು ಜೋರು ಜೋರಾಗಿ ಕಿರುಚತೊಡಗಿತು. “ನದಿಯ ದಿಕ್ಕಿನಲ್ಲಿ ಓಡಿ, , ಬೇಗ ಓಡಿ.” ಎಂದು ತನ್ನ ಪುಟ್ಟ ರೆಕ್ಕೆಗಳನ್ನು ಬಿಚ್ಚಿ ಹಾರತೊಡಗಿತು. . ಆಕಾಶದಲ್ಲಿ ಹಾರುವಾಗ ಬೆಂಕಿಯ ಜ್ವಾಲೆಗಳು ಕಾಣುತ್ತಿದ್ದವು. ಅಡವಿಯಲ್ಲಿಯ ಸಾವಿರಾರು ವರುಷ ಹಳೆಯ ಗಿಡಗಳೆಲ್ಲ ಬೆಂಕಿಯ ತುತ್ತಾಗಿದ್ದವು. ಪ್ರಾಣಿ-ಹಕ್ಕಿಗಳಿಗೆ ಬೆಂಕಿಯಿಂದ ಹೊರಬರಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ಗಿಳಿಗೆ ಬೆಂಕಿಯಲ್ಲಿ ಬಿದ್ದವರನ್ನು ಉಳಿಸುವ ಒಂದು ಹಂಚಿಕೆ ಹೊಳೆಯಿತು.



ಆ ಚಿಕ್ಕ ಗಿಳಿ ನದಿಯ ದಿಕ್ಕಿಗೆ ಹಾರುತ್ತ ಹೋಯಿತು. ನದಿಯ ದಂಡೆಯ ಮೇಲೆ ಸಾಕಷ್ಟು ಪ್ರಾಣಿ ಮತ್ತು ಹಕ್ಕಿಗಳು ಬೆಂಕಿಯಿಂದ ತಪ್ಪಿಸಿಕೊಂಡು ಆಸರೆಗಾಗಿ ಮೊದಲೇ ಬಂದಿದ್ದವು. ಮಗ್ಗುಲಲ್ಲಿ ಸೊಂಡೆಯಾಡಿಸುತ್ತ ನಿಂತ ಆನೆಯ ಕಡೆ ನೋಡಿ ಗಿಳಿಯು "ಎಲೇ ಆನೆಯೇ, ನಿನ್ನ ಸೊಂಡೆಯಿಂದ ನೀರನ್ನು ತೆಗೆದುಕೊಂಡು ಆ ಬೆಂಕಿಯ ಮೇಲೆ ಸುರಿಸು. ನಾವು ಕೂಡ ನಮ್ಮ ಮೈಯನ್ನು ಒದ್ದೆ ಮಾಡಿ ಎಲೆಯ ದೊನ್ನೆಯಲ್ಲಿ ನೀರನ್ನು ತೆಗೆದುಕೊಂಡು ಬರುತ್ತೇವೆ. ಎಲ್ಲರೂ ಕೂಡಿ ಬೆಂಕಿಯನ್ನು ನಂದಿಸುವ. ಅಡವಿಯಲ್ಲಿಯ ಉಳಿದ ಪ್ರಾಣಿಗಳ ಜೀವ ಉಳಿಸುವ. ಅಡವಿಯನ್ನು ಉಳಿಸುವ." ಎಂದು ಹೇಳಿತು. ಅಲ್ಲಿಯೇ ನಿಂತ ನರಿ ನಿಟ್ಟುಸಿರು ಬಿಡುತ್ತ "ಗಿಳಿಯೇ, ನಾವು ಏನೂ ಮಾಡಲು ಶಕ್ಯವಿಲ್ಲ. ಬಹಳ ತಡವಾಗಿದೆ." ಚಿರತೆ ತಲೆದೂಗುತ್ತ "ಸರಿ, ನಾನು ಬಹು ವೇಗದಿಂದ ಓಡಬಹುದು. ಆದರೆ ಬೆಂಕಿ ನನಗಿಂತ ಹೆಚ್ಚು ರಭಸದಿಂದ ಹಬ್ಬುತ್ತಲಿದೆ." "ನಾವೆಲ್ಲ ಎಷ್ಟು ಬಲಶಾಲಿಯಾಗಿದ್ದರೂ ಬೆಂಕಿಯ ಜತೆ ನಾವು ಆಟವಾಡಲಾರೆವು." ಎಂದು ಉಳಿದ ಪ್ರಾಣಿಗಳೆಲ್ಲ ನಿರುತ್ಸಾಹದಿಂದ ಹೇಳಿದವು.



ಆದರೂ ಆ ಚಿಕ್ಕ ಗಿಳಿಗೆ ಆಶೆಯ ಕಿರಣಗಳು ಕಾಣುತ್ತಿದ್ದವು. ತನ್ನ ರೆಕ್ಕೆಗಳನ್ನು ನೀರಲ್ಲಿ ಮುಳುಗಿಸಿ ದೊನ್ನೆಯಲ್ಲಿ ನೀರನ್ನು ತುಂಬಿ ಅದನ್ನು ಬಾಯಿಯಲ್ಲಿ ಹಿಡಿದು ಅದು ಧೈರ್ಯದಿಂದ ಬೆಂಕಿ ಹತ್ತಿದ್ದಲ್ಲಿ ಹಾರಿತು.

ಅಡವಿಯ ಮಧ್ಯದಲ್ಲಿಯ ಬೆಂಕಿ ಹತ್ತಿದ್ದಲ್ಲಿ ತನ್ನ ರೆಕ್ಕೆಗಳನ್ನು
ಹಾರಾಡಿಸಿದಾಗ ನೀರಿನ ಹನಿಗಳು ಬೆಂಕಿಯ ಮೇಲೆ ಬಿದ್ದವು.
ದೊನ್ನೆಯಲ್ಲಿಯ ನೀರನ್ನು ಬೆಂಕಿಯ ಮೇಲೆ ಸುರುವಿದಾಗ “ಚುರ್..”
ಎಂದು ಸಪ್ಪಳ ಮಾಡುತ್ತ ನೀರಿನ ಹನಿಗಳು ಮಾಯವಾದವು.

ಮತ್ತೇ ಆ ಗಿಳಿ ನದಿಯ ಕಡೆ ಹಾರಿತು. ಮತ್ತೇ ನೀರಲ್ಲಿ ಮೈ ಅದ್ದಿ ದೊನ್ನೆಯಲ್ಲಿ ಬೊಗಸೆ ನೀರನ್ನು ತೆಗೆದುಕೊಂಡು ಹಾರಲು ಅಣಿವಾಯಿತು. ಅಲ್ಲಿಯೇ ನಿಂತಿದ್ದ ಚಿಗುರೆ ಕನಿಕರದಿಂದ “ಗಿಳಿಯೇ, ಬೆಂಕಿಯಲ್ಲಿ  ಬೆಂದು ಹೋಗುವಿ. ಅಲ್ಲಿ ಹೋಗಬೇಡ.” ಎಂದು ಬಿನ್ನವಿಸಿತು.



“
ಸರಿ, ಸುತ್ತಮುತ್ತಲು ಹಬ್ಬಿದ ಬೆಂಕಿಯನ್ನು ಈ ನೀರಿನ ಹನಿಗಳು ನಂದಿಸಲಾರವು. ಸಾಕಷ್ಟು ವೇಳೆ ಯಾಗಿದೆ.” ಉಳಿದ ಪ್ರಾಣಿಗಳು ದನಿಗೂಡಿಸಿದವು. “ಗಿಳಿಯೇ, ನಮ್ಮ ಜತೆ ಇದ್ದುಬಿಡು.”

“ಗೊತ್ತಿಲ್ಲ. ನನ್ನ ಈ ಪ್ರಯತ್ನಕ್ಕೆ ಯಶಸ್ಸು ದೊರೆಯುತ್ತದೆಯೋ ಇಲ್ಲವೋ.” ಗಿಳಿಯು ನಿಟ್ಟುಸಿರು ಬಿಡುತ್ತ ಹೇಳಿತು. “ನಾನು ನನ್ನ ಪ್ರಯತ್ನ ಮಾಡುವೆ.” ಎಂದು ಹೇಳುತ್ತ ಗಿಳಿ ಅಡವಿಯ ದಿಕ್ಕಿಗೆ ಹಾರಿ ಹೋಯಿತು. ಮತ್ತೇ ರೆಕ್ಕೆಗಳಿಂದ ನೀರಿನ ಹನಿಗಳು ಬೆಂಕಿಯ ಮೇಲೆ ಬಿದ್ದವು. ದೊನ್ನೆಯನ್ನು ಬರಿ ಮಾಡಿದಾಗ “ಚುರ್...” ಎಂದು ಸಪ್ಪಳ ಬಂತು. ಈ ರೀತಿಯಾಗಿ ಅಡವಿಯಿಂದ ನದಿಗೆ ಮತ್ತು ನದಿಯಿಂದ  ಅಡವಿಗೆ ಗಿಳಿಯು ಎಡತಾಕುತ್ತಿತ್ತು. ಅದರ ಕಣ್ಣುಗಳು ನೋವಿನಿಂದ ಉರಿಯತೊಡಗಿದವು. ಅದು ಕೆಮ್ಮತೊಡಗಿತು. ಆದರೂ ಅಂಜದೆ, ಅಳುಕದೆ, ಬೇಸರ ಮಾಡದೆ ಗಿಳಿ ತನ್ನ ಕಾರ್ಯವನ್ನು ಮುಂದುವರೆಸಿತು.

ಅದೇ ಸಮಯದಲ್ಲಿ ಆಕಾಶದಲ್ಲಿ ಕೆಲ ದೇವತೆಗಳು ವಿಹಾರ ಮಾಡುತ್ತಿದ್ದವು. ವಿಮಾನದಲ್ಲಿ ಕುಳಿತು, ಬಂಗಾರದ ತಾಟಿನಲ್ಲಿಯ ತಿಂಡಿ ತಿನ್ನುತ್ತಿದ್ದವು. ಬೆಳ್ಳಿಯ ಬಟ್ಟಲಿನಲ್ಲಿಯ ಸೋಮರಸ ಕುಡಿಯುತ್ತಿದ್ದವು. ನಗೆದಾಡುತ್ತಿದ್ದವು.ಹರಟೆ ಹೊಡೆಯುತ್ತಿದ್ದವು. ಅಷ್ಟರಲ್ಲಿ ಒಂದು ದೇವತೆಗೆ ಬೆಂಕಿಯ ಝುಳದಲ್ಲಿ ನೀರು ಸುರಿಸುತ್ತಿರುವ ಚಿಕ್ಕ ಗಿಳಿ ಕಂಡಿತು. “ನೋಡಿರಲ್ಲಿ, ಒಂದು ದಡ್ಡ ಗಿಳಿ ಇಷ್ಟು ದೊಡ್ಡ ಬೆಂಕಿಯನ್ನು ಹನಿ ಹನಿ ನೀರು ಸುರುವಿ ನಂದಿಸಲು ವೃಥಾ ಪ್ರಯತ್ನಿಸುತ್ತಲಿದೆ. ಮೂರ್ಖ ಗಿಳಿ!” ಎಂದೆನ್ನುತ್ತ ನಗೆದಾಡತೊಡಗಿದವು. “ಅರಣ್ಯಕ್ಕೆ ಬೆಂಕಿ ಹತ್ತಿದೆ. ನಂದಿಸಲು ಸಾಧ್ಯವೇ? ತನಗೆ ಯಶಸ್ಸು ದೊರೆಯಲಾರದು ಎಂಬುದು ಗಿಳಿಗೆ ತಿಳಿಯಲಾರದೇ.” ಮತ್ತೊಬ್ಬಳು ನುಡಿದಳು.



ಅವರಲ್ಲಿಯ ಒಬ್ಬ ದೇವತೆ ಮಾತ್ರ ತನ್ನ ಎದುರಿನ ತಾಟನ್ನು ಬದಿಗಿರಿಸಿ ಮಹಾಕಾಯದ ಗರುಡ ಪಕ್ಷಿಯ ರೂಪ ಧರಿಸಿ ತನ್ನ ರೆಕ್ಕೆಗಳನ್ನು ಬಿಚ್ಚಿ ಗಿಳಿಯ ಎದುರಿಗೆ ಬಂದು ನಿಂತಳು. ಆಗ ಆ ಪುಟ್ಟ ಗಿಳಿ ಬೆಂಕಿಯ ಹತ್ತಿರ ಹಾರಾಡುವದರಲ್ಲಿತ್ತು.



ಗರುಡ ಅದರ ಬಳಿ ಹೋಗಿ “ಏ ಗಿಳಿಯೇ, ನೀನೆಷ್ಟು ಚಿಕ್ಕವನಿರುವಿ. ತಿರುಗಿ ಹೋಗು.” ಎಂದು ತನ್ನ ಗೊಗ್ಗರು ದನಿಯಲ್ಲಿ ಹೇಳಿತು. “ನೀರಿನ ಹನಿಗಳಿಂದ ಈ ಬೆಂಕಿಯನ್ನು ನಂದಿಸುವದು ಅಸಾಧ್ಯ.. ನಿನಗೆ ಜೀವ ಬೇಕಿದ್ದರೆ ಕೂಡಲೇ ಮರಳಿ ಹೋಗು. ಇಲ್ಲವಾದರೆ ವೇಳೆ ಮೀರಿಹೋಗಬಹುದು.” ಎಂದು ಬುದ್ಧಿ ಮಾತು ಹೇಳಿತು. ಗಿಳಿಯು ಮಾತ್ರ ಗರುಡನ ಮಾತು ಕೇಳಿಸಿಯೂ ಕೇಳಿಸದಂತೆಯೇ ತನ್ನ ಇಂಪಾದ ದನಿಯಲ್ಲಿ “ಏ ಗರುಡನೇ, ನನ್ನ ಹತ್ತಿರ ಮಾತು ಕೇಳಲು ಸಮಯವಿಲ್ಲ. ನನಗೀಗ ಸಲಹೆ ಬೇಡ. ಸಹಾಯ ಬೇಕು.” ಹೀಗೆ ಹೇಳುತ್ತ ತನ್ನ ರೆಕ್ಕೆಗಳನ್ನು ನೀರಲ್ಲಿ ಮುಳುಗಿಸತೊಡಗಿತು. ಆ ಚಿನ್ನದ ಬಣ್ಣದ ಗರುಡನಿಗೆ ಬಹು ಅಚ್ಚರಿ. ಪ್ರತಿ ಗಳಿಗೆ ಬೆಂಕಿ ಹಬ್ಬುತ್ತಲೇ ಇತ್ತು. ಅದರ ಝಳವನ್ನು ಸಹಿಸದೇ ಗರುಡ ತಂಪಾದ ತನ್ನ ವಿಮಾನದ ಕಡೆಗೆ ಹಾರತೊಡಗಿತು.



ಆಕಾಶದೆತ್ತರದಿಂದ ನೋಡಿದಾಗ ಆ ಪುಟ್ಟ ಗಿಳಿ ಬೆಂಕಿಯ ಝಳಗಳ ಮೇಲಿಂದ ಹಾರುತ್ತಿತ್ತು. ಗರುಡನಾಗಿದ್ದ ದೇವತೆ ಇತರ ದೇವತೆಗಳ ಬಳಿಗೆ ಬಂದಾಗ ಅವರೆಲ್ಲ ಮೋಜು ಮಾಡುತ್ತಿದ್ದರು. ನಗೆದಾಡುತ್ತಿದ್ದರು. ಈ ದೇವತೆ, “ಛೀ, ನಾವೆಲ್ಲ ದೇವತೆಗಳು. ದೇವತೆಗಳಿಗೆ ಇದು ಲಜ್ಜಾಸ್ಪದ. ನಾವೆಲ್ಲ ಆ ಗಿಳಿಗೆ ಸಹಾಯ ಮಾಡಬೇಕು.” ಎಂದೆನ್ನುತ್ತ ಆ ದೇವತೆ ಕಣ್ಣೀರಿಡತೊಡಗಿದಳು. ಗರುಡನ ಕಣ್ಣೀರು ದೊಡ್ಡ ಪ್ರವಾಹ ವಾಯಿತು. ಜಡಿ ಮಳೆ ಬಿದ್ದಂತೆ ಆ ಅಡವಿಯ ತುಂಬ ನೀರು ಸುರಿಯ ತೊಡಗಿತು. ಎಲ್ಲ ಪ್ರಾಣಿ ಪಕ್ಷಿಗಳ ಮೈ ತೊಯ್ದು ಹೋಯಿತು.

ಇದೇನು ಅಚ್ಚರಿ! ಗರುಡನ ಕಣ್ಣೀರಿನಿಂದ ಅಡವಿಯ ಬೆಂಕಿ ಕಡಿಮೆಯಾಗುತ್ತ ನಂದಿ ಹೋಯಿತು. ಗಿಡ ಮರಗಳ ಟೊಂಗೆಯಿಂದ ನೀರು ಸುರಿಯತೊಡಗಿತು. ಹುಲ್ಲು ಹಸಿರಾಗತೊಡಗಿತು. ಹೂಗಳೆಲ್ಲ ಅರಳತೊಡಗಿದವು. ಎಲೆಗಳೆಲ್ಲ ಹಸಿರಾಗತೊಡಗಿದವು.



ಆ ಚಿಕ್ಕ ಗಿಳಿಗೆ ಹೊಸ ರೆಕ್ಕೆಗಳು ಬಂದಿವೆ ಎಂದೆನ್ನಿಸಿತು. ಅದರ ರೆಕ್ಕೆ ಕೆಂಪು ಬಣ್ಣ, ಎಲೆಯಂತೆ ಹಸಿರು ಬಣ್ಣ, ಸೂರ್ಯಕಿರಣದಂತೆ ಬಂಗಾರ ಬಣ್ಣ, ಮತ್ತು ಮುಗಿಲಿನ ನೀಲಿ ಬಣ್ಣಗಳಂತೆ ಕಾಣತೊಡಗಿ ಗಿಳಿ ಮತ್ತಿಷ್ಟು ಚೆಂದವಾಗಿ ಕಾಣತೊಡಗಿತು. "ಅಡವಿಯ ಬೆಂಕಿ ನಂದಿ ಹೋಗಿದೆ. ಯಾವ ಅಪಾಯವಿಲ್ಲ." ಎಂದು ಗಿಳಿಯು ಹರ್ಷದಿಂದ ಹೇಳಿತು.

ಪ್ರಾಣಿಗಳೆಲ್ಲ ಕೇಕೇ ಹಾಕತೊಡಗಿದವು. ಎಲ್ಲರಿಗೂ ಅಚ್ಚರಿ. ಯಾರಿಗೂ ಅಪಾಯ ತಟ್ಟಲಿಲ್ಲ ಎಂದು ಆನಂದಿತರಾದರು. ತಮ್ಮ ತಮ್ಮ ಕಣ್ಣಲ್ಲಿಯ ಆನಂದಾಶ್ರುಗಳನ್ನು ತಡೆಯುತ್ತ ಎಲ್ಲರೂ ಒಂದೇ ದನಿಯಲ್ಲಿ "ಝಿಂದಾಬಾದ! ಈ ಪುಟ್ಟ ಗಿಳಿಗೆ ಝಿಂದಾಬಾದ! ಮುಗಿಲಿನಿಂದ ಮಳೆ ತಂದಿದ್ದಕ್ಕೆ ಝಿಂದಾಬಾದ!" ಎಂದು ದೊಡ್ಡ ದನಿಯಲ್ಲಿ ಕೂಗತೊಡಗಿದವು.

ನೀಲಿ ಬಣ್ಣದ ಮುಗಿಲಿನಲ್ಲಿ ಆ ಪುಟ್ಟ ಗಿಳಿಯು ತನ್ನ ಸಂಗಡಿಗರೊಂದಿಗೆ ಆನಂದದಿಂದ ಹಾರಾಡುತ್ತಿತ್ತು. ತನ್ನ ಕೈಯಿಂದ ಎಷ್ಟು ಸಾಧ್ಯವೋ ಅದನ್ನು ಮಾಡಿದ್ದರ ಸಮಾಧಾನ ಅದರ ಮುಖದ ಮೇಲಿತ್ತು. ಅಡವಿಗೆ ಮತ್ತು ಉಳಿದ ಪ್ರಾಣಿಗಳಿಗೆ ನಷ್ಟವಾಗಲಿಲ್ಲ. ಎಂಬ ಸಮಾಧಾನವಿತ್ತು.

